# ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 332

ಸದಸ್ಯರ ಹೆಸರು : ಶ್ರೀ ಆರ್.ಪ್ರಸನ್ನ ಕುಮಾರ್

ಉತ್ತರಿಸಬೇಕಾದ ದಿನಾಂಕ : 06-03-2020

ಉತ್ತರಿಸುವ ಸಚಿವರು : ಮಾನ್ಯ ಪ್ರವಾಸೋದ್ಯಮ, ಕನ್ನಡ ಮತ್ತು ಸಂಸ್ಕೃತಿ, ಯುವಜನ ಸಬಲೀಕರಣ ಮತ್ತು ಕ್ರೀಡಾ ಇಲಾಖೆ ಸಚಿವರು

| ಕ್ರಮ ಸಂಖ್ಯೆ | ಪ್ರಶ್ನೆ | ಉತ್ತರ |
|---|---|---|
| (ಅ) | ಕನ್ನಡ ಮತ್ತು ಸಂಸ್ಕೃತಿ ಇಲಾಖೆಯಿಂದ ಪ್ರತಿ ತಿಂಗಳು ಕಲಾವಿದರ ಮಾಸಾಶನ ಪಡೆಯಲು ಇರುವ ಮಾನದಂಡಗಳೇನು; ಇದರ ಮೊತ್ತವೆಷ್ಟು; | 1. ಸಾಹಿತಿ/ಕಲಾವಿದರಿಗೆ ಕನಿಷ್ಠ 58 ವರ್ಷ ತುಂಬಿರಬೇಕು.<br>2. 25 ವರ್ಷಗಳ ಕಾಲ ಗಣನೀಯವಾಗಿ ಕಲಾ ಸೇವೆ ದಾಖಲೆಗಳನ್ನು ಸಲ್ಲಿಸಿರಬೇಕು.<br>3. ಅಂಗವಿಕಲ ಕಲಾವಿದರಿಗೆ ವಯಸ್ಸು 40 ವರ್ಷಗಳಾಗಿರಬೇಕು<br>4. ಕಲಾವಿದರು ತಹಶೀಲ್ದಾರ್ ಅವರಿಂದ ಪಡೆದ ವಾರ್ಷಿಕ ಆದಾಯ ಪ್ರಮಾಣ ಪತ್ರವನ್ನು ಸಲ್ಲಿಸಬೇಕು. ಪಟ್ಟಣ ಹಾಗೂ ಗ್ರಾಮಾಂತರ ಪ್ರದೇಶದ ಕಲಾವಿದರಿಗೆ ರೂ.100000/- ಆದಾಯ ಮಿತಿಗೆ ಒಳಪಟ್ಟಂತೆ ಆದಾಯ ಹೊಂದಿರಬೇಕು.<br>5. ರಾಜ್ಯ ಅಥವಾ ಕೇಂದ್ರ ಸರ್ಕಾರದ ಬೇರೆ ಬೇರೆ ಯೋಜನೆಗಳಡಿಯಲ್ಲಿ ಮಾಸಾಶನ ಪಡೆಯುತ್ತಿದ್ದಲ್ಲಿ ಈ ಯೋಜನೆಯಡಿಯಲ್ಲಿ ಅರ್ಜಿಯನ್ನು ಸಲ್ಲಿಸುವಂತಿಲ್ಲ ಹಾಗೂ ಸರ್ಕಾರದಿಂದ ಒಂದು ಸೌಲತ್ತು ಪಡೆಯಲು ಅವಕಾಶವಿದ್ದು ಹೆಚ್ಚಿಗೆ ಪಡೆಯಲು ಅವಕಾಶವಿರುವುದಿಲ್ಲ. ತಹಶೀಲ್ದಾರ್ ರವರಿಂದ ಪಡೆದ ಪ್ರಮಾಣ ಪತ್ರ ಸಲ್ಲಿಸಬೇಕು.<br>6. ಮಾಹೆಯಾನ ರೂ.2000/- ಮಾಸಾಶನವನ್ನು ನೀಡುತ್ತಿದ್ದು ಮೃತಪಟ್ಟ ಕಲಾವಿದರ ಪತ್ನಿಯರಿಗೆ ವಿಧವಾ ಮಾಸಾಶನದ ಅಡಿ ರೂ.500/- ಪಾವತಿಸಲಾಗುತ್ತಿದೆ. ಅನುಬಂಧ-1,2,3ರಲ್ಲಿ ಲಗತ್ತಿಸಿದೆ. |
| (ಆ) | ಶಿವಮೊಗ್ಗ ಮತ್ತು ದಾವಣಗೆರೆ ಜಿಲ್ಲೆ ಹೊನ್ನಳಿ ಮತ್ತು ಚನ್ನಗಿರಿ ತಾಲ್ಲೂಕುಗಳ ವ್ಯಾಪ್ತಿಯಲ್ಲಿರುವ ಕನ್ನಡ ಮತ್ತು ಸಂಸ್ಕೃತಿ ಇಲಾಖೆ ವತಿಯಿಂದ ಪ್ರತಿ ತಿಂಗಳು ಮಾಸಾಶನ ಪಡೆಯುತ್ತಿರುವ ಒಟ್ಟು ಕಲಾವಿದರ ಸಂಖ್ಯೆ ಎಷ್ಟು? (ತಾಲ್ಲೂಕುವಾರು ಕಲಾವಿದರ ಸಂಪೂರ್ಣ ಮಾಹಿತಿ ನೀಡುವುದು) | (see table below)<br>ಅನುಬಂಧ-4ರಲ್ಲಿ ಲಗತ್ತಿಸಿದೆ. |

| ತಾಲ್ಲೂಕು | ಮಾಸಾಶನ ಪಡೆಯುತ್ತಿರುವವರ ಸಂಖ್ಯೆ |
|---|---|
| ಹೊನ್ನಾಳಿ | 28 |
| ಚನ್ನಗಿರಿ | 41 |

ಕಸಂವಾ 19 ಕವಿಸ 2020

(ಸಿ.ಟಿ.ರವಿ)
ಮಾನ್ಯ ಪ್ರವಾಸೋದ್ಯಮ, ಕನ್ನಡ ಮತ್ತು ಸಂಸ್ಕೃತಿ,
ಯುವಜನ ಸಬಲೀಕರಣ ಹಾಗೂ
ಕ್ರೀಡಾ ಇಲಾಖೆ ಸಚಿವರು

ಮಾನ್ಯ ವಿಧಾನಪರಿಷತ್ ಸದಸ್ಯರಾದ ಶ್ರೀ ಆರ್. ಪ್ರಸನ್ನಕುಮಾರ್, ಇವರ
ಚುಕ್ಕೆಗುರುತಿಲ್ಲದ ಪ್ರಶ್ನೆ ಸಂಖ್ಯೆ. 332 ಕ್ಕೆ ಅನುಬಂಧ - 1

ಸರ್ಕಾರದ ಆದೇಶ ಸಂಖ್ಯೆ: ಕಸಂವಾ 340 ಕಸಧ 2015, ಬೆಂಗಳೂರು, ದಿನಾಂಕ: 18-09-2015

## ಅನುಬಂಧ - 10

### ಕಷ್ಟ ಪರಿಸ್ಥಿತಿಯಲ್ಲಿರುವ ಸಾಹಿತಿ/ಕಲಾವಿದರಿಗೆ ಮಾಸಾಶನ ಮಂಜೂರಾತಿ ನಿಯಮಗಳ ಮಾರ್ಗಸೂಚಿ

1. ಸಾಹಿತ್ಯ. ಸಂಗೀತ. ನೃತ್ಯ. ನಾಟಕ. ಜನಪದ. ಯಕ್ಷಗಾನ. ಬಯಲಾಟ. ಲಲಿತಕಲೆ. ಶಿಲ್ಪಕಲೆ ಕ್ಷೇತ್ರಗಳಲ್ಲಿ 25 ವರ್ಷಗಳ ಕಾಲ ಗಣನೀಯ ಸೇವೆ ಸಲ್ಲಿಸಿ ಕಷ್ಟ ಪರಿಸ್ಥಿತಿಯಲ್ಲಿರುವ ಕಲಾವಿದರು ಮಾಸಾಶನ ಪಡೆಯಲು ಅರ್ಜಿ ಸಲ್ಲಿಸಬಹುದು. ಸಂಬಂಧಿತ ವಿಷಯ ಕ್ಷೇತ್ರದಲ್ಲಿ 25 ವರ್ಷಗಳ ಗಣನೀಯ ಸೇವೆ ಸಲ್ಲಿಸಿರುವ ಬಗ್ಗೆ ಆಯಾ ಜಿಲ್ಲಾ ಸಹಾಯಕ ನಿರ್ದೇಶಕರ ಮೂಲಕ ಮೂಲ ದಾಖಲೆಗಳನ್ನು ಪರಿಶೀಲನೆಗೊಳಪಡಿಸಿ ಧೃಡೀಕರಣ ಪಡೆಯಬೇಕು.

2. ಕಲಾವಿದರು ಕನಿಷ್ಠ 58 ವಯೋಮಾನದವರಾಗಿರಬೇಕು. ವಯಸ್ಸಿನ ಬಗ್ಗೆ ಶಿಕ್ಷಣ ಸಂಸ್ಥೆ ನೀಡಿದ ಅಥವಾ ನ್ಯಾಯಾಲಯದಿಂದ ಅಫಿಡವಿಟ್ ಪಡೆದು ಸಲ್ಲಿಸಬೇಕು.

3. ಕಲಾವಿದರು ತಹಶೀಲ್ದಾರ್ ಅವರಿಂದ ಪಡೆದ ವಾರ್ಷಿಕ ಆದಾಯ ಪ್ರಮಾಣಪತ್ರವನ್ನು ಸಲ್ಲಿಸಬೇಕು. (ಗ್ರಾಮಾಂತರ ಪ್ರದೇಶಗಳಿಗೆ ರೂ. 40.000/- ಹಾಗೂ ಪಟ್ಟಣ ಪ್ರದೇಶಗಳಿಗೆ ರೂ. 50.000/- ಗರಿಷ್ಠ ಆದಾಯ ಮಿತಿಗೆ ಒಳಪಟ್ಟಂತೆ ಆದಾಯ ಹೊಂದಿರಬೇಕು.

4. ಅಂಗವಿಕಲ ಕಲಾವಿದರಿಗೆ ವಯಸ್ಸು 40 ವರ್ಷಗಳಾಗಿದ್ದರೆ ಅಥವಾ 20 ವರ್ಷಗಳಿಂದ ಸೇವೆ ಸಲ್ಲಿಸಿದ್ದರೆ. ಮಾಸಾಶನ ಮಂಜೂರಾತಿಗೆ ಅರ್ಜಿಯನ್ನು ಪರಿಗಣಿಸಲಾಗುವುದು. ತಮ್ಮ ದೈಹಿಕ ಅಂಗವಿಕಲತೆಯ ಬಗ್ಗೆ ಅಧಿಕೃತ ವೈದ್ಯಕೀಯ ದಾಖಲೆಗಳನ್ನು ಸಲ್ಲಿಸಬೇಕು. 20 ವರ್ಷಗಳಿಂದ ಸೇವೆ ಸಲ್ಲಿಸಿರುವ ಬಗ್ಗೆ ಸಂಬಂಧಿತ ಕಲಾವಿದರು ಮೂಲ ದಾಖಲೆಗಳನ್ನು ಪರಿಶೀಲಿಸಿ ಜಿಲ್ಲಾ ಸಹಾಯಕ ನಿರ್ದೇಶಕರಿಂದ ಧೃಡೀಕರಣ ಪಡೆಯಬೇಕು.

5. ಸಾಹಿತಿ ಕಲಾವಿದರಿಗೆ ಮಾಹೆಯಾನ ಮಾಸಾಶನ ರೂ.1.500/-ಗಳಾಗಿರುತ್ತದೆ.

6. ಈಗಾಗಲೇ ರಾಜ್ಯ ಅಥವಾ ಕೇಂದ್ರ ಸರ್ಕಾರದ ಬೇರೆ ಬೇರೆ ಯೋಜನೆಗಳಡಿಯಲ್ಲಿ ಮಾಸಾಶನ ಪಡೆಯುತ್ತಿದ್ದಲ್ಲಿ ಈ ಯೋಜನೆಯಡಿಯಲ್ಲಿ ಅರ್ಜಿಯನ್ನು ಸಲ್ಲಿಸುವಂತಿಲ್ಲ.

7. ಮಾಸಾಶನಕ್ಕೆ ಅರ್ಜಿ ಸಲ್ಲಿಸಬಯಸುವ ಸಾಹಿತಿ ಕಲಾವಿದರು ಆಯಾ ಜಿಲ್ಲೆಯ ಕನ್ನಡ ಮತ್ತು ಸಂಸ್ಕೃತಿ ಇಲಾಖೆಯ ಸಹಾಯಕ ನಿರ್ದೇಶಕರಿಂದ ನಿಗದಿತ ಅರ್ಜಿ ನಮೂನೆಯನ್ನು ಪಡೆದು ಭರ್ತಿ ಮಾಡಿ ಆಯಾ ಜಿಲ್ಲಾ ಸಹಾಯಕ ನಿರ್ದೇಶಕರಿಗೆ ಸಲ್ಲಿಸಬೇಕು. ಜಿಲ್ಲಾ ಸಹಾಯಕ ನಿರ್ದೇಶಕರು ಮಾರ್ಗಸೂಚಿಯನುಸಾರ. ಸೇವೆಯ ಬಗ್ಗೆ ಮೂಲ ದಾಖಲೆಗಳನ್ನು ಪರಿಶೀಲಿಸಿ. ಧೃಡೀಕರಿಸಿ. ಕಲಾವಿದರ ವಯಸ್ಸು. ವರಮಾನ. ಕ್ಷೇತ್ರ. ಕಲಾಸೇವೆ ವಿವರಗಳನ್ನು ಪ್ರತ್ಯೇಕವಾಗಿ (ಸಾಹಿತ್ಯ. ಸಂಗೀತ. ನೃತ್ಯ. ನಾಟಕ. ಲಲಿತಕಲೆ. ಶಿಲ್ಪಕಲೆ. ಜನಪದ. ಯಕ್ಷಗಾನ. ) ಪಟ್ಟಿ ಮಾಡಿ ಮೂಲ ಅರ್ಜಿಗಳ ಸಮೇತ ಸಂಬಂಧಿತ ಅಕಾಡೆಮಿಗಳಿಗೆ ಕಳುಹಿಸಬೇಕು.

8. ಅರ್ಜಿದಾರರು ಎರಡು ಬಣ್ಣಗಳುಳ್ಳ ದ್ವಿಪ್ರತಿಯ ಮಾಸಾಶನ ಅರ್ಜಿಯನ್ನು ಅವರ ಇತ್ತೀಚಿನ ಭಾವಚಿತ್ರ, ಸರಿಯಾದ ಅಂಚೆ ವಿಳಾಸ ಮತ್ತು ಅಗತ್ಯ ದಾಖಲೆಗಳೊಂದಿಗೆ ಕಲಾಸೇವೆ ಮೂಲ ದಾಖಲೆ ಅಥವಾ (ಗೆಜೆಟೆಡ್)ಪತ್ರಾಂಕಿತ ಅಧಿಕಾರಿಯಿಂದ ದೃಢೀಕೃತವಾದ ದಾಖಲೆಗಳೊಂದಿಗೆ ಸಹಿ ಮಾಡಿ ಲಗತ್ತಿಸಿರಬೇಕು. ಭಾವಚಿತ್ರಗಳನ್ನು ಅರ್ಜಿಯ ಮೇಲೆ ಲಗತ್ತಿಸಿ ಭಾವಚಿತ್ರಗಳಿಗೆ ಪತ್ರಾಂಕಿತ ಅಧಿಕಾರಿಯಿಂದ ದೃಢೀಕರಣ ಪಡೆಯಬೇಕು.

9. ಜಿಲ್ಲಾ ಸಹಾಯಕ ನಿರ್ದೇಶಕರು ಸಾಹಿತಿ ಕಲಾವಿದರಿಂದ ಸ್ವೀಕರಿಸಿದ ಮಾಸಾಶನದ ಅರ್ಜಿಗಳನ್ನು ಕೂಲಂಕುಷವಾಗಿ ಪರಿಶೀಲಿಸಿದ ನಂತರ ಭಾಗ-3 (ಶಿಫಾರಸ್ಸು) ಎಂಬ ವಿಭಾಗದಲ್ಲಿ ಕಲಾವಿದರ ಬಗ್ಗೆ ತಮ್ಮ ಖಚಿತ ಅಭಿಪ್ರಾಯ ತಿಳುಳಿಸಿ ಸಹಿ ಮತ್ತು ಮೊಹರನ್ನು ಕಡ್ಡಾಯವಾಗಿ ನಮೂದಿಸಬೇಕು. ಸಹಿ ಮತ್ತು ಮೊಹರು ಇಲ್ಲದ ದಾಖಲೆಗಳಿಲ್ಲದ ಅಪೂರ್ಣ ಅರ್ಜಿಗಳನ್ನು ಯಾವುದೇ ಕಾರಣಕ್ಕೂ ಪರಿಗಣಿಸಲಾಗುವುದಿಲ್ಲ. ಹಾಗೂ ಅಂತಹ ಅರ್ಜಿಗಳನ್ನು ಸಲ್ಲಿಸಿದಲ್ಲಿ ಅದನ್ನು ಕರ್ತವ್ಯ ಲೋಪವೆಂದು ಪರಿಗಣಿಸಿ ಅವರ ವಿರುದ್ಧ ಶಿಸ್ತು ಕ್ರಮ ಜರುಗಿಸಲಾಗುವುದು.

10. ಕಲಾವಿದರು ಅನಕ್ಷರಸ್ಥರಾಗಿದ್ದು, ಸಹಿಯ ಬದಲು ಹೆಬ್ಬೆಟ್ಟು ಗುರುತು ನಮೂದಿಸಿದಲ್ಲಿ . ಅವರ ಹೆಬ್ಬೆಟ್ಟಿನ ಗುರುತನ್ನು "ಈ ಹೆಬ್ಬೆಟ್ಟಿನ ಗುರುತು ______ ಇವರದ್ದು" ಎಂದು ಪ್ರಮಾಣಿಸಿ ದೃಢೀಕರಿಸಬೇಕು.

11. ಜಿಲ್ಲಾ ಸಹಾಯಕ ನಿರ್ದೇಶಕರುಗಳಿಗೆ ಸಲ್ಲಿಕೆಯಾದ ದ್ವಿಪ್ರತಿಯ ಮಾಸಾಶನದ ನಿಗದಿತ ಅರ್ಜಿ ನಮೂನೆಯನ್ನು ಸಂಬಂಧಿಸಿದ ಕಲಾವಿದರ ಮೂಲ ದಾಖಲೆಗಳೊಂದಿಗೆ ಕಲಾಸೇವೆಯ ಬಗ್ಗೆ ಪರಿಶೀಲಿಸಿ ನಿಯಮಾನುಸಾರ ಸಲ್ಲಿಕೆಯಾಗಿರುವ ಅರ್ಜಿಗಳ ನಕಲು ಪ್ರತಿಯನ್ನು ಕಚೇರಿಯಲ್ಲಿ ಸಂರಕ್ಷಿಸಿಟ್ಟು, ಮೂಲ ಅರ್ಜಿಯನ್ನು ದಾಖಲೆಗಳ ಸಮೇತ ತನ್ನ ಶಿಫಾರಸ್ಸಿನೊಂದಿಗೆ ಸಂಬಂಧಿಸಿದ ಅಕಾಡೆಮಿಗೆ ಪ್ರತಿ ತಿಂಗಳ ಮೊದಲ ವಾರದಲ್ಲಿ ಕಳುಹಿಸಿಕೊಡಬೇಕು. ಮತ್ತು ಕಲಾವಿದರಿಗೆ ಈ ಬಗ್ಗೆ ಸೂಕ್ತ ಹಿಂಬರಹ ನೀಡುವುದು.

12. ಅಕಾಡೆಮಿಗಳು ಸ್ವೀಕೃತವಾದ ಅರ್ಜಿಗಳನ್ನು ನಿಯಮಾನುಸಾರ ಪರಿಶೀಲಿಸಿ ಅವಶ್ಯವಿದ್ದಲ್ಲಿ ಅಕಾಡೆಮಿ ಹಂತದಲ್ಲಿ ಕಲಾವಿದರ ಸಂದರ್ಶನ ನಡೆಸಿ, ಕಲಾಸೇವೆಯ ಬಗ್ಗೆ ಖಚಿತ ಪಡಿಸಿಕೊಂಡು, ಅರ್ಜಿಗಳನ್ನು ಸ್ಥಾಯಿ ಸಮಿತಿಯಲ್ಲಿ ಮಂಡಿಸಿ ತೀರ್ಮಾನ ಪಡೆದು ಸೂಕ್ತ ಶಿಫಾರಸ್ಸಿನೊಂದಿಗೆ ಇಲಾಖೆಗೆ ಕಳುಹಿಸಿಕೊಡಬೇಕು.

13 ಅರ್ಜಿದಾರರು ತನ್ನ ಅರ್ಜಿಯೊಂದಿಗೆ ವಾರ್ಷಿಕ ವರಮಾನ ಪ್ರಮಾಣಪತ್ರ, ವಯಸ್ಸಿನ ದಾಖಲೆ, ಸೇವಾ ಪ್ರಮಾಣ ಪತ್ರಗಳನ್ನು ಪಡೆದ ನಂತರವೂ ಯಾವುದೇ ಸಂದರ್ಭದಲ್ಲಿ ಕಲಾವಿದರ ದಾಖಲೆಗಳ ಬಗ್ಗೆ ಅನುಮಾನ ಬಂದಲ್ಲಿ ಅಂತಹ ಪ್ರಕರಣಗಳ ಬಗ್ಗೆ ತನಿಖೆ ನಡೆಸಿ ಸಮಂಜಸವೆನಿಸಿದಲ್ಲಿ ಮಾಸಾಶನವನ್ನು ರದ್ದು ಪಡಿಸಲಾಗುವುದು. ಹಾಗೂ ಸುಳ್ಳು ಮಾಹಿತಿ ನೀಡಿದ ಆರೋಪದ ಮೇಲೆ ಕಾನೂನು ಕ್ರಮ ಜರುಗಿಸಲಾಗುವುದು.

(ಮಲ್ಲಿಕಾರ್ಜುನ)
ಸರ್ಕಾರದ ಅಧೀನ ಕಾರ್ಯದರ್ಶಿ
ಕನ್ನಡ, ಸಂಸ್ಕೃತಿ ಹಾಗೂ ವಾರ್ತಾ ಇಲಾಖೆ.

## ಅನುಬಂಧ-ಡಿ

### ಕರ್ನಾಟಕ ಸರ್ಕಾರದ ನಡವಳಿಗಳು

**ವಿಷಯ:** ಸಾಹಿತಿ / ಕಲಾವಿದರ ಮಾಸಾಶನ ಮತ್ತು ವೈದ್ಯಕೀಯ ವೆಚ್ಚ ಮರುಪಾವತಿಯ - ವಾರ್ಷಿಕ ಆದಾಯ ಮಿತಿಯನ್ನು ಹೆಚ್ಚಿಸುವ ಬಗ್ಗೆ.

**ಓದಲಾಗಿದೆ:** 1) ಸರ್ಕಾರದ ಆದೇಶ ಸಂಖ್ಯೆ: ಕಸಂವಾಪ್ರ 19 ಕಸಧ 2011, ದಿನಾಂಕ:22-03-2012.
2) ಸರ್ಕಾರದ ಆದೇಶ ಸಂಖ್ಯೆ: ಕೆಆರ್‌ಎ: 84, ದಿನಾಂಕ: 01-08-1985, 25-09-1986, 06-10-1986, 13-04-1987.
3) ಸರ್ಕಾರದ ಆದೇಶ ಸಂಖ್ಯೆ:ಕಸಂವಾ 07 ವಾ.ಇ.2016 ದಿನಾಂಕ:03-05-2017.
4) ನಿರ್ದೇಶಕರು, ಕನ್ನಡ ಮತ್ತು ಸಂಸ್ಕೃತಿ ಇಲಾಖೆ ಇವರ ಪತ್ರ ಸಂಖ್ಯೆ: ಡಿಕೆಸಿ- 13011/1/2019, ದಿನಾಂಕ: 08-03-2019.

****

ಪ್ರಸ್ತಾವನೆ:

ಕನ್ನಡ ಮತ್ತು ಸಂಸ್ಕೃತಿ ಇಲಾಖೆ ವತಿಯಿಂದ, ಸಾಹಿತಿ / ಕಲಾವಿದರಿಗೆ ಜೀವನ ಸಂಧ್ಯಾಕಾಲದಲ್ಲಿ ಜೀವನ ನಡೆಸಲು ಅನುಕೂಲವಾಗುವಂತೆ 58ವರ್ಷ ದಾಟಿದ, ಆರ್ಥಿಕವಾಗಿ ಹಿಂದುಳಿದ ಅಶಕ್ತ ಸಾಹಿತಿ /ಕಲಾವಿದರಿಗೆ ಮಾಹೆಯಾನ ರೂ.1500/-ಗಳಂತೆ ಮಾಸಾಶನ ಮಂಜೂರು ಮಾಡಲಾಗುತ್ತಿದ್ದು, ಈ ಮಾಸಾಶನ ಮಂಜೂರಾತಿಗೆ ಮೇಲೆ ಓದಲಾದ(1)ರ ಸರ್ಕಾರದ ಆದೇಶದಲ್ಲಿ ಗ್ರಾಮಾಂತರ ಪ್ರದೇಶಗಳಿಗೆ ರೂ.40,000/- ಹಾಗೂ ಪಟ್ಟಣ ಪ್ರದೇಶಗಳಿಗೆ ರೂ.50,000/-ಗಳನ್ನು ಗರಿಷ್ಠ ವಾರ್ಷಿಕ ಮಿತಿ ಇರಬೇಕು ಎಂದು ಆದೇಶಿಸಿದೆ.

ನಾಡಿನ ಸಂಗೀತ / ನೃತ್ಯ / ನಾಟಕ / ಜಾನಪದ / ಯಕ್ಷಗಾನ / ಬಯಲಾಟ / ಲಲಿತಕಲೆ / ಶಿಲ್ಪಕಲೆ ಮತ್ತು ಸಾಹಿತ್ಯ ಕ್ಷೇತ್ರಗಳಲ್ಲಿ ಸೇವೆ ಸಲ್ಲಿಸಿದ ಕೇಂದ್ರ ಅಥವಾ ರಾಜ್ಯ ಪುರಸ್ಕೃತರು, ಮತ್ತು ಪುಸ್ತಕ ಬಹುಮಾನ ಪಡೆದವರು ಕೇಂದ್ರ ಅಥವಾ ರಾಜ್ಯ ಅಕಾಡೆಮಿಗಳ ಹಾಲಿ ಮತ್ತು ಮಾಜಿ ಅಧ್ಯಕ್ಷರು/ಸದಸ್ಯರುಗಳ ಆದಾಯ ಮಿತಿ ರೂ.36,000/-ಕ್ಕೆ ಒಳಪಟ್ಟಿದ್ದು, ವಯೋಸಹಜ ಖಾಯಿಲೆಗಳಿಂದ ಬಳಲುತ್ತಿರುವವರಿಗೆ ಮೇಲೆ ಓದಲಾದ(2)ರ ಸರ್ಕಾರದ ಆದೇಶದಲ್ಲಿ ಉಚಿತ ವೈದ್ಯಕೀಯ ಗುರುತಿನ ಚೀಟಿ ವಿತರಿಸುವ ಮೂಲಕ ವೈದ್ಯಕೀಯ ವೆಚ್ಚ ಮರುಪಾವತಿ ಸೌಲಭ್ಯವನ್ನು ಕಲ್ಪಿಸಿ ಆದೇಶಿಸಲಾಗಿದೆ.

ನಿರ್ದೇಶಕರು, ವಾರ್ತಾ ಮತ್ತು ಸಾರ್ವಜನಿಕ ಸಂಪರ್ಕ ಇಲಾಖೆ ಬೆಂಗಳೂರು ವತಿಯಿಂದ ಅನುಷ್ಠಾನಗೊಳಿಸುತ್ತಿರುವ ಸಂಕಷ್ಟದಲ್ಲಿರುವ ಪತ್ರಕರ್ತರಿಗೆ ಮಾಸಾಶನ ಮಂಜೂರಾತಿ ನಿಯಮಾವಳಿಗಳನ್ವಯ ವಾರ್ಷಿಕ ಆದಾಯ ಮಿತಿಯನ್ನು ಮೇಲೆ ಓದಲಾದ(3)ರ ಸರ್ಕಾರದ ಆದೇಶದಲ್ಲಿ ರೂ.1.00.000/-ಗಳಿಗೆ ನಿಗದಿಪಡಿಸಿ ಆದೇಶಿಸಿದೆ ಮತ್ತು ಈ ಸಂಬಂಧ ದಿನಾಂಕ:08.03.2019ರಂದು ಭರವಸೆ ಸಮಿತಿ ಸಭೆಯಲ್ಲಿ ಚರ್ಚೆ ನಡೆದು ವಾರ್ತಾ ಇಲಾಖೆಯಲ್ಲಿ ನಿಗದಿಪಡಿಸಿರುವ ಆದಾಯ ಮಿತಿಯಂತೆಯೆ ಕನ್ನಡ ಮತ್ತು ಸಂಸ್ಕೃತಿ ಇಲಾಖೆಯಲ್ಲಿ ಪರಿಷ್ಕರಿಸಲು ಮಾನ್ಯ ಅಧ್ಯಕ್ಷರು, ಭರವಸೆ ಸಮಿತಿ ಸಭೆಯಲ್ಲಿ ಸೂಚಿಸಿರುತ್ತಾರೆ.

ಈ ಮೇರೆಗೆ ಕನ್ನಡ ಮತ್ತು ಸಂಸ್ಕೃತಿ ಇಲಾಖೆಯಿಂದ ಅನುಷ್ಠಾನಗೊಳಿಸುತ್ತಿರುವ ಸಾಹಿತಿ / ಕಲಾವಿದರಿಗೆ ಮಾಸಾಶನ ಮೃತ ಸಾಹಿತಿ / ಕಲಾವಿದರ ಧರ್ಮಪತ್ನಿಗೆ ವಿಧವಾ ಮಾಸಾಶನ, ಸಾಹಿತಿ / ಕಲಾವಿದರ ವೈದ್ಯಕೀಯ ವೆಚ್ಚ ಮರುಪಾವತಿ ಯೋಜನೆಗಳ ವಾರ್ಷಿಕ ಆದಾಯ ಮಿತಿಯನ್ನು ಏಕರೂಪವಾಗಿ ರೂ.1.00ಲಕ್ಷಗಳಿಗೆ ಹೆಚ್ಚಿಸಿ ಸರ್ಕಾರದ ಆದೇಶ ಹೊರಡಿಸುವಂತೆ ಮೇಲೆ(4)ರಲ್ಲಿ ಓದಲಾದ ಪತ್ರದಲ್ಲಿ ನಿರ್ದೇಶಕರು, ಕನ್ನಡ ಮತ್ತು ಸಂಸ್ಕೃತಿ ಇಲಾಖೆ ಇವರು ಸರ್ಕಾರವನ್ನು ಕೋರಿರುತ್ತಾರೆ.

**ಸರ್ಕಾರದ ಆದೇಶ ಸಂಖ್ಯೆ: ಕಸಂವಾ 7 ಕಗೌಧ 2019, ಬೆಂಗಳೂರು, ದಿನಾಂಕ: 14-10-2019**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಕನ್ನಡ ಮತ್ತು ಸಂಸ್ಕೃತಿ ಇಲಾಖೆಯ ವತಿಯಿಂದ ಅನುಷ್ಠಾನಗೊಳಿಸುತ್ತಿರುವ ಸಾಹಿತಿ / ಕಲಾವಿದರಿಗೆ ಮಾಸಾಶನ ಮೃತ ಸಾಹಿತಿ / ಕಲಾವಿದರ ಧರ್ಮಪತ್ನಿಗೆ ವಿಧವಾ ಮಾಸಾಶನ, ಸಾಹಿತಿ / ಕಲಾವಿದರ ವೈದ್ಯಕೀಯ ವೆಚ್ಚ ಮರುಪಾವತಿ ಯೋಜನೆಗಳ ವಾರ್ಷಿಕ ಆದಾಯ ಮಿತಿಯನ್ನು ಏಕರೂಪವಾಗಿ ರೂ.1.00ಲಕ್ಷಗಳಿಗೆ(ಒಂದು ಲಕ್ಷ ರೂಪಾಯಿಗಳು ಮಾತ್ರ) ಹೆಚ್ಚಿಸಿ, ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ
ಮತ್ತು ಅವರ ಹೆಸರಿನಲ್ಲಿ

14/10/19

(ಪಿ.ಎಸ್.ಮಾಲತಿ)
ಸರ್ಕಾರದ ಅಧೀನ ಕಾರ್ಯದರ್ಶಿ,
ಕನ್ನಡ ಮತ್ತು ಸಂಸ್ಕೃತಿ ಇಲಾಖೆ,
(ಸಂಸ್ಕೃತಿ ಶಾಖೆ)

ಗೆ:

1. ಮಹಾಲೇಖಪಾಲಕರು, (ಎ & ಇ) ಕರ್ನಾಟಕ, ಬೆಂಗಳೂರು.
2. ನಿರ್ದೇಶಕರು, ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಕನ್ನಡ ಭವನ, ಬೆಂಗಳೂರು.
3. ಮಾನ್ಯ ಕನ್ನಡ ಮತ್ತು ಸಂಸ್ಕೃತಿ ಸಚಿವರ ಆಪ್ತ ಕಾರ್ಯದರ್ಶಿ, ವಿಧಾನಸೌಧ, ಬೆಂಗಳೂರು.
4. ನಿರ್ದೇಶಕರು, ರಾಜ್ಯ ಖಜಾನೆ ಇಲಾಖೆ, ವಿ.ವಿ.ಗೋಪುರ, ಬೆಂಗಳೂರು.
5. ಸರ್ಕಾರದ ಕಾರ್ಯದರ್ಶಿಗಳ ಆಪ್ತ ಕಾರ್ಯದರ್ಶಿ / ಅಪರ ಮುಖ್ಯ ಕಾರ್ಯದರ್ಶಿಗಳ ಆಪ್ತ ಸಹಾಯಕರು / ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ವಿಕಾಸಸೌಧ, ಬೆಂಗಳೂರು.
6. ಶಾಖಾ ರಕ್ಷಾ ಕಡತ / ಹೆಚ್ಚುವರಿ ಪ್ರತಿಗಳು.

ಅನುಬಂಧ-3

**ಕರ್ನಾಟಕ ಸರ್ಕಾರದ ನಡವಳಿಗಳು**

ವಿಷಯ: ಸಾಂಸ್ಕೃತಿಕ ನೀತಿಯಲ್ಲಿ ಅನುಮೋದಿಸಿರುವಂತೆ ಕಷ್ಟಪರಿಸ್ಥಿತಿಯಲ್ಲಿರುವ ಹಿರಿಯ ಸಾಹಿತಿ / ಕಲಾವಿದರ ಮಾಸಾಶನ ಹೆಚ್ಚಿಸುವ ಬಗ್ಗೆ.

ಓದಲಾಗಿದೆ: 1) ಸರ್ಕಾರದ ಆದೇಶ ಸಂ:ಕಸಂವಾ 560 ಕಸಧ 2013, ದಿ:10-10-2017.
2) ನಿರ್ದೇಶಕರು, ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಇವರ ಪತ್ರ ಸಂಖ್ಯೆ:ಡಿಕೆಸಿ/13011/1/2018, ದಿನಾಂಕ:16-02-2019.

**ಪ್ರಸ್ತಾವನೆ:-**

ಕರ್ನಾಟಕ ಸರ್ಕಾರವು ಸಾಂಸ್ಕೃತಿಕ ನೀತಿಯಲ್ಲಿ ಆದೇಶಿಸಿರುವಂತೆ, ರಾಜ್ಯದ ಕಷ್ಟಪರಿಸ್ಥಿತಿಯಲ್ಲಿರುವ ಹಿರಿಯ ಸಾಹಿತಿ / ಕಲಾವಿದರಿಗೆ ಹಾಲಿ ನೀಡುತ್ತಿರುವ ಮಾಹೆಯಾನ ರೂ.1500/-ಗಳ ಮಾಸಾಶನವನ್ನು ರೂ.2000/-ಗಳಿಗೆ ಹೆಚ್ಚಿಸಲು ಮೇಲೆ ಓದಲಾದ (1)ರಲ್ಲಿ ಸರ್ಕಾರವು ಸಾಂಸ್ಕೃತಿಕ ನೀತಿಯಲ್ಲಿ ಆದೇಶಿಸಿರುತ್ತದೆ.

ಮುಂದುವರೆದು, ಇಳಿವಯಸ್ಸಿನಲ್ಲಿ ಅಸಕ್ತ ಹಿರಿಯ ಸಾಹಿತಿ / ಕಲಾವಿದರುಗಳಿಗೆ ಗೌರವಯುತ ಜೀವನ ನಿರ್ವಹಣೆಗಾಗಿ ಸರ್ಕಾರವು ಮಾಹೆಯಾನ 1500/-ಗಳನ್ನು ನೀಡಲಾಗುತ್ತಿದ್ದು, ಈ ಮಾಸಾಶನವನ್ನು ರೂ.1500/-ಗಳಿಂದ ರೂ.2000/-ಗಳಿಗೆ ಹೆಚ್ಚಿಸಿದ್ದಲ್ಲಿ, ರೂ.8,21,82,000/-ಗಳ ಹೆಚ್ಚುವರಿ ಅನುದಾನ ಬೇಕಾಗುತ್ತದೆ. ಲೆಕ್ಕಶೀರ್ಷಿಕೆ 2205-00-102-01-18-251 ರಡಿ, ಆರ್ಥಿಕ ಇಲಾಖೆಯ ಅನುಮೋದನೆಯೊಂದಿಗೆ ಹಿರಿಯ ಸಾಹಿತಿ / ಕಲಾವಿದರ ಮಾಸಾಶನವನ್ನು ರೂ.2000/-ಗಳಿಗೆ ಹೆಚ್ಚಿಸಿ ಸರ್ಕಾರದ ಆದೇಶ ಹೊರಡಿಸುವಂತೆ ಮೇಲೆ ಓದಲಾದ (2)ರ ಪತ್ರದಲ್ಲಿ ನಿರ್ದೇಶಕರು, ಕನ್ನಡ ಮತ್ತು ಸಂಸ್ಕೃತಿ ಇಲಾಖೆ ಇವರು ಸರ್ಕಾರವನ್ನು ಕೋರಿರುತ್ತಾರೆ.

ಪ್ರಸ್ತಾವನೆಯನ್ನು ಪರಿಶೀಲಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಕಸಂವಾ 06 ಕಗೌಧ 2019, ಬೆಂಗಳೂರು, ದಿನಾಂಕ: 16-11-2019**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ರಾಜ್ಯದಲ್ಲಿನ ಕಷ್ಟಪರಿಸ್ಥಿತಿಯಲ್ಲಿರುವ ಹಿರಿಯ ಸಾಹಿತಿ / ಕಲಾವಿದರುಗಳಿಗೆ ಪ್ರಸ್ತುತ ನೀಡುತ್ತಿರುವ ಮಾಸಾಶನ ರೂ.1500/-ಗಳನ್ನು ದಿನಾಂಕ:01-10-2019ರಿಂದ ಜಾರಿಗೆ ಬರುವಂತೆ ರೂ.2000/-ಗಳಿಗೆ ಹೆಚ್ಚಿಸಲು ಸರ್ಕಾರದ ಮಂಜೂರಾತಿ ನೀಡಲಾಗಿದೆ.

2) ಸದರಿ ವೆಚ್ಚವನ್ನು 2019-20ನೇ ಸಾಲಿನ ಲೆಕ್ಕಶೀರ್ಷಿಕೆ 2205-00-102-01-18-251 ರಡಿ ಭರಿಸತಕ್ಕದ್ದು.

3) ಈ ಆದೇಶವನ್ನು ಸರ್ಕಾರದ ಆದೇಶ ಸಂಖ್ಯೆ: ಎಫ್‌ಡಿ 01 ಟಿಎಫ್‌ಪಿ 2019, ದಿನಾಂಕ: 04-07-2019ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ಪ್ರತ್ಯಾಯೋಜಿಸಿರುವ ಅಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ
ಮತ್ತು ಅವರ ಹೆಸರಿನಲ್ಲಿ

Malati 16/11/19

(ಪಿ.ಎಸ್. ಮಾಲತಿ)
ಸರ್ಕಾರದ ಅಧೀನ ಕಾರ್ಯದರ್ಶಿ
ಕನ್ನಡ ಮತ್ತು ಸಂಸ್ಕೃತಿ ಇಲಾಖೆ.
(ಸಂಸ್ಕೃತಿ ಶಾಖೆ)

ಗೆ:

1. ಮಹಾಲೇಖಪಾಲರು (ಎ&ಇ). (ಜಿ&ಎಸ್ ಎಸ್ ಎ). (ಇ & ಆರ್ ಎಸ್ ಎ). ಕರ್ನಾಟಕ, ಹೊಸ ಕಟ್ಟಡ, ಆಡಿಟ್ ಭವನ, ಬೆಂಗಳೂರು.
2. ನಿರ್ದೇಶಕರು, ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಜೆ.ಸಿ.ರಸ್ತೆ, ಬೆಂಗಳೂರು.
3. ಮಾನ್ಯ ಪ್ರವಾಸೋದ್ಯಮ, ಕನ್ನಡ ಮತ್ತು ಸಂಸ್ಕೃತಿ ಸಚಿವರ ಆಪ್ತ ಕಾರ್ಯದರ್ಶಿ, ವಿಧಾನಸೌಧ, ಬೆಂಗಳೂರು.
4. ಜಂಟಿ ನಿರ್ದೇಶಕರು, ರಾಜ್ಯ ಹುಜೂರ್ ಖಜಾನೆ, ಬೆಂಗಳೂರು.
5. ಶಾಖಾ ರಕ್ಷಾ ಕಡತ/ಹೆಚ್ಚುವರಿ ಪ್ರತಿಗಳು.

## DETAILS OF ART AND CULCHER PENSIONRS IN HONNALI TREASURY

| SL NO | PENSIONRS NAME | PENSIONR ADRES | PPO NO |
|---|---|---|---|
| 1 | ESWARAPPA H | NARASAGONDANAHALLI HONNALI | 10345/ART |
| 2 | SHNMUGACHARIYA A | DEVANARANAHALLI HONNALI | 14069/ART |
| 3 | CHANNABASAPPA H | | 15783/ART |
| 4 | THIRTHAMMA | SAWALANGA NYAMATHI TQ | 387/ART/FP |
| 5 | CHANDRASHEKARAPPA | SOGILU NYAMATHI TQ | 18186/ART |
| 6 | PARAMESWARACHAR B | ARABAGATTE HONNALI TQ | 18154/ART/DVG |
| 7 | KOTESWARACHAR M A | MASADI HONNALI TQ | 15175/ART |
| 8 | BASAMMA | KATHIGE HONNALI TQ | 23455/ART |
| 9 | K C MAHESWARAPPA | ODEYARAHATHUR NYAMATHI TQ | 19090/ART |
| 10 | BEERAPPA | SURAHONNE NYAMATHI TQ | 21235/ART |
| 11 | H NAGARAJAPPA | SURAHONNE NYAMATHI TQ | 21243/ART |
| 12 | REVANAPPA H | SURAHONNE NYAMTHI TQ | 21247/ART |
| 13 | H CHANDRASHEKARAPPA | SURAHONNE NYAMTHI TQ | 2248/ART |
| 14 | H OMKARAPPA | SURAHONNE NYAMATHI TQ | 21242/ART |
| 15 | H NARASIMHAPPA | SURAHONNE NYAMATHI TQ | 21234/ART |
| 16 | K JAYAPPA | DEVIKOPPA NYAMATHI TQ | 21233/ART |
| 17 | R NARASIMHAPPA | SURAHONNE NYAMATHI TQ | 21240/ART |
| 18 | S KARISIDDAPPA | SURAHONNE NYAMATHI TQ | 21217/ART |
| 19 | YALLAPPA | SURAHONNE NYAMATI TQ | 21218/ART |
| 20 | SHIVAPPA K | SURAHONNE NYAMATHI TQ | 21219/ART |
| 21 | KARIBASAPPA | N B ROAD HONNALI HNL TQ | 18181/ART |
| 22 | GM BASAVESWARACHARI | SYAMATHI GRAMA NYAMATHI TQ | 18174/ART |
| 23 | MALLESHAPPA H | PALAVANAHALLI NYAMATHI TQ | 16286/ART |
| 24 | RAMAPPA G | SURAHONNE NYAMATHI TQ | 15244/ART |
| 25 | NARASAMMA | SURAHONNE NYAMATHI TQ | 9/SPL/DVG |
| 26 | KUMBARCHANDRAPPA HOSAMANE | NYAMATHI | 24698/ART |
| 27 | CHANDRAPPA M | KATHIGE NYAMATHI TQ | 24710/ART |
| 28 | VEERAPPA N S | HOSAHALLI HONNALI TQ | 24697/ART |

DETAILS OF ART AND CULCHER PENSIONRS IN CHENNAGIRI TREASURY......

| SL NO | PENSIONER NAME | PPONO | TQ |
|---|---|---|---|
| 1 | M.Rudrappa | 251/SPL/SMG | Channagiri |
| 2 | B R Kalachari | 212/SPL/SMG | Channagiri |
| 3 | Siddalingamma | 11687/ART | Channagiri |
| 4 | Gurumurthachar B K | 14048/ART | Channagiri |
| 5 | Lakshmidevamma | 14039/ART | Channagiri |
| 6 | Thippeswamy B E | 15220/ART | Channagiri |
| 7 | Gangadharappa T | 15240/ART | Channagiri |
| 8 | Basavarajappa H | 15776/ART | Channagiri |
| 9 | Ningamma | 18184/ART | Channagiri |
| 10 | Malleshappa | 18169/ART | Channagiri |
| 11 | Veerabhadrappa K C | 18183/ART | Channagiri |
| 12 | B M Chandrappa | 21280/ART | Channagiri |
| 13 | G B Kumaraswamy | 21264/ART | Channagiri |
| 14 | Gururaja M P | 23360/ART | Channagiri |
| 15 | Rathnamma | 23365/ART | Channagiri |
| 16 | Susheelamma (FP) | 28/FP/ART | Channagiri |
| 17 | Nagendrappa T H | 23456/ART | Channagiri |
| 18 | Lakkamma gorappara | 16269/ART | Devarahalli |
| 19 | Lakshmamma | 21244/ART | Devarahalli |
| 20 | Rathnamma T H | 23452/ART | Devarahalli |
| 21 | Boramma (FP) | PM-0086-ART-FP | Devarahalli |
| 22 | Renukaiah swamy AM | 11683/ART | Basavapatna |
| ~~23~~ | ~~Mallamma~~ | ~~24/FP/SPL~~ | Hodigere |
| 24 | Veerappa M | 15246/ART | Devarahalli |
| 25 | Rudrappa | 15784/ART | Devarahalli |
| 26 | Nagabyrappa | 24714/ART | Channagiri |
| 27 | Manjappa | 24701/ART | Channagiri |
| 28 | Revappa | 24712/ART | Channagiri |
| 29 | Malleshappa A K | 23431/ART | Channagiri |
| 30 | Junjappa | 21224/ART | Channagiri |
| 31 | Yugadharma K R | 10342/ART | Channagiri |
| 32 | REVAPPA | 12474/ART | Channagiri |
| 33 | Seetharamaiah s | 14059/ART | Channagiri |
| 34 | siddappa | 19092/ART | Channagiri |
| 35 | Chandramma K | 24702/ART | Channagiri |
| 36 | A K Hanumanthappa | 21249/ART | Channagiri |
| 37 | Govindappa | 21279/ART | Channagiri |
| 38 | Basamma | 23240/ART | Channagiri |
| 39 | Surappa | 23237/ART | Channagiri |
| 40 | Sakamma | 21229/ART | Channagiri |
| 41 | Lakshmamma | 23239/ART | Channagiri |